# ಕರ್ನಾಟಕ ವಿಧಾನ ಪರಿಷತ್ತು

(3)

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 18 (209)
2 ಸದಸ್ಯರ ಹೆಸರು : ಶ್ರೀ. ಕೆ.ಪ್ರತಾಪ ಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3 ಉತ್ತರಿಸಬೇಕಾದ ದಿನಾಂಕ : 14-12-2021
4 ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಉಡುಪಿ ನಗರಕ್ಕೆ ಶುದ್ಧ ಕುಡಿಯುವ ನೀರನ್ನು ಪೂರೈಸುವ ಯೋಜನೆಯ ಅಂದಾಜು ಮೊತ್ತವೆಷ್ಟು: ಕರಾರು ಮೊತ್ತವೆಷ್ಟು: ಪ್ರಸ್ತುತ ಈ ಯೋಜನೆಯ ಕಾಮಗಾರಿಗಳು ಪೂರ್ಣಗೊಂಡಿದೆ: ಪ್ರಗತಿಯಲ್ಲಿರುವ ಕಾಮಗಾರಿಗಳು ಯಾವುವು: ಪಾವತಿಸಿದ ಮೊತ್ತವೆಷ್ಟು: ಪಾವತಿಗೆ ಬಾಕಿಯಿರುವ ಮೊತ್ತವೆಷ್ಟು: ಈ ಕಾಮಗಾರಿಯ ಗುಣಮಟ್ಟ ಪರೀಕ್ಷೆಯನ್ನು ಯಾವ ಏಜೆನ್ಸಿಯ ಮೂಲಕ ನಡೆಸಲಾಗುತ್ತಿದೆ: (ಕಾಮಗಾರಿವಾರು ಮಾಹಿತಿ ನೀಡುವುದು) | ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಏಷ್ಯನ್ ಅಭಿವೃದ್ಧಿ ಬ್ಯಾಂಕ್(ಎಡಿಬಿ) ಮತ್ತು ಕೇಂದ್ರ ಪುರಸ್ಕೃತ ಅಮೃತ್ ಸಹಯೋಗದೊಂದಿಗೆ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣೆ ಹೂಡಿಕೆ ಕಾರ್ಯಕ್ರಮ (ಕ್ವಿಮಿಪ್) ಯೋಜನೆಯಡಿ ಉಡುಪಿ ನಗರಕ್ಕೆ ಶುದ್ಧ ಕುಡಿಯುವ ನೀರನ್ನು ಪೂರೈಸಲು ಮೂರು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಕಾಮಗಾರಿಗಳ ಅಂದಾಜು ಮೊತ್ತ, ಕರಾರು ಮೊತ್ತ, ಪ್ರಸ್ತುತ ಯೋಜನೆಯ ಪ್ರಗತಿ, ಈ ಕಾಮಗಾರಿಯ ಗುಣಮಟ್ಟ ಪರೀಕ್ಷೆ ಮಾಡಲಾಗುತ್ತಿರುವ ಏಜೆನ್ಸಿಯ ಕುರಿತ ಮಾಹಿತಿಯನ್ನು **ಅನುಬಂಧದಲ್ಲಿ** ವಿವರಿಸಿದೆ. |
| ಆ) | ವರ್ಷದ ಎಲ್ಲಾ ಕಾಲದಲ್ಲೂ ವಾರಾಹಿ ಕಾಲುವೆಯಿಂದ ನೇರ ನೀರನ್ನು ಪಡೆಯಲು ಅವಕಾಶವಿದ್ದರೂ ಅಧಿಕ ವೆಚ್ಚದೊಂದಿಗೆ 6 ತಿಂಗಳು ನದಿಯಿಂದ ನೀರನ್ನು ಪಡೆಯುವ ಔಚಿತ್ಯವೇನು: ನದಿಯಿಂದ 6 ತಿಂಗಳು ನೀರನ್ನು ಪಡೆಯುವದರಿಂದ ಉಡುಪಿ ನಗರ ಸಭೆಗೆ ಆಗುವ ಆರ್ಥಿಕ ಹೊರೆ ಎಷ್ಟು: ನದಿಯಲ್ಲಿ ನೀರನ್ನು ಹರಿಸುವುದರ ಮೂಲಕ ಖಾಸಗಿ ವಿದ್ಯುತ್ ಉತ್ಪಾದನೆಗೆ ಸಹಾಯ ಮಾಡುವ ಉದ್ದೇಶವನ್ನು ಸರಕಾರ ಗಮನಿಸಿದೆಯೇ? | ಕುಂದಾಪುರ ತಾಲ್ಲೂಕಿನ ಹಾಲಾಡಿ ಗ್ರಾಮದ ಚೋರಾಡಿ ಸಮೀಪ ವಾರಾಹಿ ಎಡದಂಡೆ ಮುಖ್ಯ ನಾಲೆಯ 12.950 ಕಿ.ಮೀ. ನ ಎಡಬಾಗದಲ್ಲಿ ಹೆಚ್ಚುವರಿಯಾಗಿ ಔಟ್‌ಲೆಟ್ ನಿರ್ಮಿಸಿ ಉಡುಪಿ ನಗರಕ್ಕೆ ನಾಲೆಯಿಂದಲೇ ನೀರನ್ನು ಸರಬರಾಜು ಮಾಡಲಾಗುವುದು ಇದರಿಂದ ಉಡುಪಿ ನಗರ ಸಭೆಗೆ ಯಾವುದೇ ಆರ್ಥಿಕ ಹೊರೆ ಆಗುವುದಿಲ್ಲ ನಾಲೆಯಲ್ಲಿ ನೀರು ಲಭ್ಯವಿರುವಾಗ ನಾಲೆಯಿಂದಲೇ ನೀರನ್ನು ಬಳಸಲಾಗುವುದು ಮತ್ತು ನಾಲೆಯಲ್ಲಿ ನೀರು ಲಭ್ಯವಿಲ್ಲದ ಸಂದರ್ಭದಲ್ಲಿ ನದಿಯಿಂದ ನೀರನ್ನು ಬಳಸಲಾಗುವುದು.<br><br>ನಾಲೆಯಿಂದ ನೀರನ್ನು ಹಾಲಾಡಿಯಲ್ಲಿ |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ನಿರ್ಮಿಸಲಾಗುತ್ತಿರುವ ನೀರು ಶುದ್ಧೀಕರಣ ಘಟಕಕ್ಕೆ ಹರಿಸಿ ಅಲ್ಲಿ ನೀರು ಶುದ್ಧೀಕರಣವಾದ ಬಳಿಕ ಮಾರ್ಗದಲ್ಲಿಯ 23 ಗ್ರಾಮಗಳಿಗೆ ಶುದ್ಧ ಕುಡಿಯುವ ನೀರು ಒದಗಿಸಿ, ನೇರವಾಗಿ ಮಣಿಪಾಲದ ಜಿ.ಎಲ್.ಎಸ್.ಆರ್‌ಗೆ ಹರಿಸಲಾಗುವುದು ಇದರಲ್ಲಿ ಯಾವುದೇ ಖಾಸಗಿ ವಿದ್ಯುತ್ ಉತ್ಪಾದನೆಗೆ ಸಹಾಯ ಮಾಡುವ ಉದ್ದೇಶ ಇರುವುದಿಲ್ಲ. |

ಕಡತ ಸಂಖ್ಯೆ: ನಅಇ 236 ಪಿ.ಆರ್.ಜೆ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

ಅನುಬಂಧ

**ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ**

ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣೆ ಹೂಡಿಕೆ ಕಾರ್ಯಕ್ರಮ ದಡಿ ಉಡುಪಿ ನಗರದಲ್ಲಿ ಅನುಷ್ಠಾನಗೊಳಿಸುತ್ತಿರು ಕುಡಿಯುವ ನೀರು ಸರಬರಾಜು ಕಾಮಗಾರಿಗಳ ವಿವರ ಈ ಕೆಳಗಿನಂತಿದೆ;

1. **ಕಾಮಗಾರಿಯ ಹೆಸರು:** ಉಡುಪಿ ನಗರಕ್ಕೆ ನೀರು ಮೂಲದ ಅಭಿವೃದ್ಧಿ ಕಾಮಗಾರಿ(ವಾರಾಹಿ ನದಿ ಮೂಲದಿಂದ)
   **ಕಾಮಗಾರಿಯ ಅಂದಾಜು ಮೊತ್ತ:** ರೂ 122.50 ಕೋಟಿಗಳು
   **ಕಾಮಗಾರಿಯ ಗುತ್ತಿಗೆ ಮೊತ್ತ:** ರೂ 119.51 ಕೋಟಿಗಳು
   **30/11/2021 ರವರೆಗೆ ಪಾವತಿಸಿದ ಮೊತ್ತ:** ರೂ 75.21 ಕೋಟಿಗಳು
   **ಬಾಕಿ ಪಾವತಿಸಬೇಕಾದ ಮೊತ್ತ:** ರೂ 44.30 ಕೋಟಿಗಳು
   **ಕಾಮಗಾರಿ ಪ್ರಾರಂಭದ ದಿನಾಂಕ:** 23.08.2018
   **ಕಾಮಗಾರಿ ಮುಕ್ತಾಯದ ದಿನಾಂಕ:** 22.05.2022
   **ಕಾಮಗಾರಿಯಲ್ಲಿಯ ಪ್ರಮುಖ ಘಟಕಗಳು:** 38.54 ಕಿಮೀ 864 ಎಂ ಎಂ ವ್ಯಾಸದ ಉಕ್ಕಿನ ಪೈಪ್‌ಲೈನ್ ಅಳವಡಿಸುವುದು, ಜಾಕ್‌ವೆಲ್ ನಿರ್ಮಾಣ, ವಿದ್ಯುತ್ ಯಂತ್ರೋಪಕರಣಗಳ ಅಳವಡಿಕೆ ಹಾಗೂ ಇತರೆ.
   **ಕಾಮಗಾರಿಯ ಪ್ರಗತಿ:** 38.54 ಕಿಮೀ 864 ಎಂ ಎಂ ವ್ಯಾಸದ ಉಕ್ಕಿನ ಪೈಪ್‌ಲೈನ್ ಅಳವಡಿಸಬೇಕಿದ್ದು ಇದರಲ್ಲಿ 23.26 ಕಿಮೀ ಅಳವಡಿಸಿದೆ ಭೌತಿಕ ಪ್ರಗತಿ ಶೇ 58.77 ಸಾದಿಸಿದ್ದು, ಆರ್ಥಿಕ ಪ್ರಗತಿ ಶೇ 62.93 ಸಾದಿಸಲಾಗಿದೆ.

ಸದರಿ ಕಾಮಗಾರಿಯ ಯೋಜನಾ ಸಮಾಲೋಚಕರಾಗಿ M/s Tractebel GKW GmbH ರವರು ಕಾರ್ಯನಿರ್ವಹಿಸುತ್ತಿದ್ದು, ಕಾಮಗಾರಿಯ ಗುಣಮಟ್ಟದ ಖಾತ್ರಿಯ ಕುರಿತು ಯೋಜನಾ ಅನುಷ್ಠಾನ ಘಟಕ್ಕೆ ಇವರು ಸಲಹೆಗಾರರಾಗಿ ಮತ್ತು ಸಮಾಲೋಚಕರಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಸಾಮಗ್ರಿಗಳ ಗುಣಮಟ್ಟದ ಪರೀಕ್ಷೆಯನ್ನು ಸ್ಥಳೀಯ ಇಂಜಿಯನಿರಿಂಗ್ ಕಾಲೇಜ್‌ನಲ್ಲಿ ಕೈಗೊಳ್ಳಲಾಗುತ್ತಿದೆ.

2. **ಕಾಮಗಾರಿಯ ಹೆಸರು:** ಉಡುಪಿ ನಗರಕ್ಕೆ ಸಗಟು ನೀರಿನ ಅಭಿವೃದ್ಧಿ ಕಾಮಗಾರಿ(45 ಎಂಎಲ್‌ಡಿ ಸಾಮರ್ಥ್ಯದ ನೀರು ಶುದ್ಧೀಕರಣ ಘಟಕ ನಿರ್ಮಾಣ ಒಳಗೊಂಡಿದೆ)
   **ಕಾಮಗಾರಿಯ ಅಂದಾಜು ಮೊತ್ತ:** ರೂ 48.31 ಕೋಟಿಗಳು
   **ಕಾಮಗಾರಿಯ ಗುತ್ತಿಗೆ ಮೊತ್ತ:** ರೂ 50.80 ಕೋಟಿಗಳು
   **30/11/2021 ರವರೆಗೆ ಪಾವತಿಸಿದ ಮೊತ್ತ:** ರೂ 5.08 ಕೋಟಿಗಳು
   **ಬಾಕಿ ಪಾವತಿಸಬೇಕಾದ ಮೊತ್ತ:** ರೂ 45.72 ಕೋಟಿಗಳು
   **ಕಾಮಗಾರಿ ಪ್ರಾರಂಭದ ದಿನಾಂಕ:** 31.05.2021
   **ಕಾಮಗಾರಿ ಮುಕ್ತಾಯದ ದಿನಾಂಕ:** 30.05.2023
   **ಕಾಮಗಾರಿಯಲ್ಲಿಯ ಪ್ರಮುಖ ಘಟಕಗಳು:** 45 ಎಂಎಲ್‌ಡಿ ಸಾಮರ್ಥ್ಯದ ನೀರು ಶುದ್ಧೀಕರಣ ಘಟಕ ನಿರ್ಮಾಣ, 27 ಎಂಎಲ್‌ಡಿ ಬ್ಯಾಕ್ ವಾಶ್ ಘಟಕ ಹಾಗೂ ಇತರೆ.
   **ಕಾಮಗಾರಿಯ ಪ್ರಗತಿ:** 45 ಎಂಎಲ್‌ಡಿ ಸಾಮರ್ಥ್ಯದ ನೀರು ಶುದ್ಧೀಕರಣ ಘಟಕ ನಿರ್ಮಾಣಕ್ಕಾಗಿ Earth filling ಪ್ರಗತಿಯಲ್ಲಿದೆ. ಆರ್ಥಿಕ ಪ್ರಗತಿ ಶೇ 10% ಸಾದಿಸಲಾಗಿದೆ.

ಸದರಿ ಕಾಮಗಾರಿಯ ಯೋಜನಾ ಸಮಾಲೋಚಕರಾಗಿ M/s Tractebel GKW GmbH ರವರು ಕಾರ್ಯನಿರ್ವಹಿಸುತ್ತಿದ್ದು, ಕಾಮಗಾರಿಯ ಗುಣಮಟ್ಟದ ಖಾತ್ರಿಯ ಕುರಿತು ಯೋಜನಾ ಅನುಷ್ಠಾನ ಘಟಕ್ಕೆ ಇವರು ಸಲಹೆಗಾರರಾಗಿ ಮತ್ತು ಸಮಾಲೋಚಕರಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಸಾಮಗ್ರಿಗಳ ಗುಣಮಟ್ಟದ ಪರೀಕ್ಷೆಯನ್ನು ಸ್ಥಳೀಯ ಇಂಜಿಯನಿರಿಂಗ್ ಕಾಲೇಜ್‌ನಲ್ಲಿ ಕೈಗೊಳ್ಳಲಾಗುತ್ತಿದೆ.

3. **ಕಾಮಗಾರಿಯ ಹೆಸರು:** ಉಡುಪಿ ನಗರಕ್ಕೆ ಕುಡಿಯುವ ನೀರು ಸರಬರಾಜುಗಾಗಿ ವಿತರಣಾ ಜಾಲಗಳ ಅಭಿವೃದ್ಧಿ ಮತ್ತು ವಿಸ್ತರಣೆ ಕಾಮಗಾರಿ(24/7)
**ಕಾಮಗಾರಿಯ ಅಂದಾಜು ಮೊತ್ತ:** ರೂ 119.59 ಕೋಟಿಗಳು
**ಕಾಮಗಾರಿಯ ಗುತ್ತಿಗೆ ಮೊತ್ತ:** ರೂ 107.08 ಕೋಟಿಗಳು
**30/11/2021 ರವರೆಗೆ ಪಾವತಿಸಿದ ಮೊತ್ತ:** ರೂ 50.78 ಕೋಟಿಗಳು
**ಬಾಕಿ ಪಾವತಿಸಬೇಕಾದ ಮೊತ್ತ:** ರೂ 56.30 ಕೋಟಿಗಳು
**ಕಾಮಗಾರಿ ಪ್ರಾರಂಭದ ದಿನಾಂಕ:** 16.11.2018
**ಕಾಮಗಾರಿ ಮುಕ್ತಾಯದ ದಿನಾಂಕ:** 10.10.2022
**ಕಾಮಗಾರಿಯಲ್ಲಿಯ ಪ್ರಮುಖ ಘಟಕಗಳು:** 296 ಕಿ.ಮೀ ಪೈಪ್‌ಲೈನ್ ಅಳವಡಿಸುವುದು, 36452 ಸಂಖ್ಯೆಯ ಮೀಟರ್ ನೊಂದಿಗೆ ನಳಸಂಪರ್ಕಗಳು, 7 ಮೇಲ್ಮಟ್ಟದ ಜಲಸಂಗ್ರಹಗಾರಗಳು ಹಾಗೂ ಇತರೆ.
**ಕಾಮಗಾರಿಯ ಪ್ರಗತಿ:** 149.28 ಕಿಮೀ ಪೈಪ್‌ಲೈನ್ ಅಳವಡಿಸಿದೆ, 5084 ಸಂಖ್ಯೆಯ ಮೀಟರ್ ನೊಂದಿಗೆ ನಳಸಂಪರ್ಕ, 6 ಮೇಲ್ಮಟ್ಟದ ಜಲಸಂಗ್ರಹಗಾರಗಳ ನಿರ್ಮಾಣದಲ್ಲಿ ಶೇ 61.33 ಒಟ್ಟು ಶೇ 43.92 ಭೌತಿಕ ಪ್ರಗತಿ ಸಾದಿಸಿದ್ದು, ಆರ್ಥಿಕ ಪ್ರಗತಿ ಶೇ 47.42 ಸಾದಿಸಲಾಗಿದೆ.

ಸದರಿ ಕಾಮಗಾರಿಯ ಯೋಜನಾ ಸಮಾಲೋಚಕರಾಗಿ M/s Egis India ರವರು ಕಾರ್ಯನಿರ್ವಹಿಸುತ್ತಿದ್ದು, ಕಾಮಗಾರಿಯ ಗುಣಮಟ್ಟದ ಖಾತ್ರಿಯ ಕುರಿತು ಯೋಜನಾ ಅನುಷ್ಠಾನ ಘಟಕ್ಕೆ ಇವರು ಸಲಹೆಗಾರರಾಗಿ ಮತ್ತು ಸಮಾಲೋಚಕರಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಸಾಮಗ್ರಿಗಳ ಗುಣಮಟ್ಟದ ಪರೀಕ್ಷೆಯನ್ನು ಸ್ಥಳೀಯ ಇಂಜಿಯನಿರಿಂಗ್ ಕಾಲೇಜ್‌ನಲ್ಲಿ ಕೈಗೊಳ್ಳಲಾಗುತ್ತಿದೆ.